





(ಅವತೀರ್ಣ - ಮದೀನಾದಲ್ಲಿ)

بِسْمِ اللهِ الرَّحْمٰنِ الرَّحِيْمِ

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

إِذَا زُلْزِلَتِ الْأَرْضُ زِلْزَالَهَا ①

1. ಭೂಮಿಯು ತನ್ನ ಸಂಪೂರ್ಣ ಉಗ್ರತೆಯೊಂದಿಗೆ ಕುಲುಕಲ್ಪಡುವಾಗ,

وَأَخْرَجَتِ الْأَرْضُ أَثْقَالَهَا ②

2. ಭೂಮಿಯು ತನ್ನೊಳಗಿನ ಸಕಲ ಹೊರೆಗಳನ್ನೂ ಹೊರ ಹಾಕಿ ಬಿಡುವಾಗ-

وَقَالَ الْإِنْسَانُ مَا لَهَا ③

3. ಮತ್ತು ಮನುಷ್ಯನು 'ಇದಕ್ಕೇನಾಗುತ್ತಿದೆ?' ಎನ್ನುವಾಗ,

يَوْمَئِذٍ تُحَدِّثُ أَخْبَارَهَا ④

4. ಅಂದು ಅದು ತನ್ನ (ಮೇಲೆ ಗತಿಸಿದ) ಸ್ಥಿತಿಗತಿಗಳನ್ನು ವಿವರಿಸುವುದು-

بِأَنَّ رَبَّكَ أَوْحَىٰ لَهَا ⑤

5. ಏಕೆಂದರೆ ನಿನ್ನ ಪ್ರಭು ಅದಕ್ಕೆ (ಹಾಗೆ ಮಾಡಬೇಕೆಂದು) ಅಪ್ಪಣೆ ಕೊಟ್ಟಿರುವನು.

يَوْمَئِذٍ يَصْدُرُ النَّاسُ أَشْتَاتًا لِّيُرَوْا أَعْمَالَهُمْ ⑥

6. ಅಂದು ಜನರು ವಿಭಿನ್ನ ಸ್ಥಿತಿಗಳಲ್ಲಿ ಮರಳುವರು. (ಇದು) ಅವರ ಕರ್ಮಗಳು ಅವರಿಗೆ ತೋರಿಸಲ್ಪಡಲಿಕ್ಕಾಗಿ,

فَمَنْ يَّعْمَلْ مِثْقَالَ ذَرَّةٍ خَيْرًا يَّرَهُ ⑦

7. ತರುವಾಯ ಅಣು ಗಾತ್ರದಷ್ಟು ಪುಣ್ಯ ಕಾರ್ಯವೆಸಗಿದವನು ಅದನ್ನು ಕಂಡೇ ತೀರುವನು.

وَمَنْ يَّعْمَلْ مِثْقَالَ ذَرَّةٍ شَرًّا يَّرَهُ ⑧

8. ಮತ್ತು ಅಣು ಗಾತ್ರದಷ್ಟು ಪಾಪ ಕಾರ್ಯವೆಸಗಿದವನು ಅದನ್ನು ಕಂಡೇ ತೀರುವನು.

---